# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 662
ಉತ್ತರಿಸುವ ದಿನಾಂಕ : 17.12.2021
ಸದಸ್ಯರ ಹೆಸರು : ಶ್ರೀ ಶಾಂತಾರಾಮ್ ಬುಡ್ನ ಸಿದ್ದಿ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವ ಸಚಿವರು : ಮಾನ್ಯ ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಉತ್ತರ ಕನ್ನಡ ಜಿಲ್ಲೆಯ ಅತ್ಯಂತ ಹಿಂದುಳಿದ ಜನಾಂಗವಾದ ಬುಡಕಟ್ಟು ಸಿದ್ದಿ ಜನರ ಯುವಕ ಮತ್ತು ಯುವತಿಯರಿಗಾಗಿ ಯಲ್ಲಾಪುರದಲ್ಲಿ ಕ್ರೀಡಾ ಶಾಲೆ ಪ್ರಾರಂಭಿಸಲು ಸರ್ಕಾರದ ಯೋಜನೆ ಇದೆಯೇ? ಇದ್ದಲ್ಲಿ ಪ್ರಾರಂಭಿಸುವುದು ಯಾವಾಗ? | ಈಗಾಗಲೇ ಉತ್ತರ ಕನ್ನಡ ಜಿಲ್ಲೆಯ ಕಾರವಾರ ಮತ್ತು ಹಳಿಯಾಳ ತಾಲ್ಲೂಕಿನಲ್ಲಿ ಕ್ರೀಡಾ ವಸತಿ ಶಾಲೆಗಳು ಇಲಾಖೆ ವತಿಯಿಂದ ಕಾರ್ಯ ನಿರ್ವಹಿಸುತ್ತಿವೆ. ಮುಂದುವರೆದು, ಪ್ರಸ್ತುತ ಹಳಿಯಾಳ ತಾಲ್ಲೂಕು ಕ್ರೀಡಾಂಗಣದಲ್ಲಿ ಕುಸ್ತಿ ಮತ್ತು ಅಥ್ಲೆಟಿಕ್ಸ್ ಕ್ರೀಡೆಗಾಗಿ ಅವಶ್ಯಕವಾದ ಮೂಲಭೂತ ಸೌಕರ್ಯಗಳಿವೆ. ಖೇಲೋ ಇಂಡಿಯಾ ಯೋಜನೆಯಡಿ ಈಗಾಗಲೇ ಉತ್ತರ ಕನ್ನಡ ಜಿಲ್ಲೆಯಲ್ಲಿ ಕೂಡ ಸುಸಜ್ಜಿತ ಒಳಾಂಗಣ ಕ್ರೀಡಾಂಗಣ ನಿರ್ಮಾಣವಾಗುತ್ತಿದ್ದು, ಕ್ರೀಡಾಪಟುಗಳಿಗೆ ತರಬೇತಿಗೆ ಬೇಕಾದ ಎಲ್ಲಾ ಸೌಕರ್ಯಗಳನ್ನು ನೀಡಲು ಕ್ರಮವಹಿಸಲಾಗುತ್ತಿದೆ. ಇಲಾಖೆಯು ಕ್ರೀಡಾ ವಿಜ್ಞಾನ ಕೇಂದ್ರದ ಸಹಯೋಗದಡಿಯಲ್ಲಿ ಆಯ್ಕೆ ಮಾಡಲಾಗಿರುವ ಸಿದ್ದಿ ಜನಾಂಗದ 50 ಕ್ರೀಡಾಪಟುಗಳಿಗೆ ಬೆಂಗಳೂರಿನ ಶ್ರೀ ಜಯಪ್ರಕಾಶ್ ನಾರಾಯಣ ರಾಷ್ಟ್ರೀಯ ಯುವ ತರಬೇತಿ ಕೇಂದ್ರದಲ್ಲಿ ವಸತಿ ಸೌಲಭ್ಯವನ್ನು ಕಲ್ಪಿಸುವ ಪ್ರಸ್ತಾವನೆಯು ಪರಿಶೀಲನೆಯಲ್ಲಿದೆ. ಈ ಹಿನ್ನಲೆಯಲ್ಲಿ, ಯಲ್ಲಾಪುರದಲ್ಲಿ ಕ್ರೀಡಾ ಶಾಲೆ ಪ್ರಾರಂಭಿಸಲು ಯಾವುದೇ ಯೋಜನೆ ಇರುವುದಿಲ್ಲ. |

**ವೈಎಸ್‌ಡಿ/ಇಬಿಬಿ/197/2021**

**(ಡಾ. ನಾರಾಯಣಗೌಡ)**
ರೇಷ್ಮೆ, ಯುವ ಸಬಲೀಕರಣ ಮತ್ತು
ಕ್ರೀಡಾ ಸಚಿವರು.